# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1503
ಸದಸ್ಯರ ಹೆಸರು : ಶ್ರೀ ಆರ್. ಧರ್ಮಸೇನ
ಉತ್ತರಿಸಬೇಕಾದ ದಿನಾಂಕ : 19.03.2020
ಉತ್ತರಿಸುವ ಸಚಿವರು : ಗೃಹ ಸಚಿವರು

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| (ಅ) | ವಾಹನಗಳ ದಾಖಲೆಗಳನ್ನು ತಪಾಸಣೆ ಮಾಡಿ ಕೇಸು ದಾಖಲಿಸಲು ಅರ್ಹತೆ ಹೊಂದಿರುವ ಪೊಲೀಸ್ ಅಧಿಕಾರಿ ಯಾರು ; ಪೊಲೀಸ್ ಪೇದೆಗಳು ವಾಹನಗಳನ್ನು ತಡೆದು ತಪಾಸಣೆ ಮಾಡಲು ನಿಯಮದಲ್ಲಿ ಅವಕಾಶವಿದೆಯೇ ; | ನಿಯಮಗಳ ಪ್ರಕಾರ ಎ.ಎಸ್.ಐ., ಮತ್ತು ಮೇಲ್ಪಟ್ಟ ಅಧಿಕಾರಿಗಳಿಗೆ ಸಂಚಾರ ನಿಯಮಗಳನ್ನು ಉಲ್ಲಂಘಿಸುವವರ ವಿರುದ್ಧ ಮೋಟಾರು ವಾಹನ ಕಾಯ್ದೆಯಡಿಯಲ್ಲಿ ದಂಡ ವಿಧಿಸುವ ವಿತ್ತಾಧಿಕಾರವಿರುತ್ತದೆ. ಅಲ್ಲದೆ ಸಂಚಾರ ದಟ್ಟಣೆಯನ್ನು ನಿವಾರಿಸಲು ಮತ್ತು ಸಂಚಾರಿ ನಿಯಮಗಳ ಉಲ್ಲಂಘನೆಗಳ ವಿರುದ್ಧ ಕ್ರಮ ಜರುಗಿಸಲು ಪಿ.ಸಿ. ಮತ್ತು ಹೆಚ್.ಸಿ. ರವರುಗಳಿಗೆ ಎಫ್.ಟಿ.ವಿ.ಆರ್. (Filed Traffic Violation Report) ಗಳನ್ನು ತಯಾರಿಸಲು ನೇಮಿಸಿ ಅವರಿಂದ ಪಡೆದುಕೊಂಡು ಎಫ್.ಟಿ.ವಿ.ಆರ್. ವರದಿಯನ್ವಯ ಟ್ರಾಫಿಕ್ ಚೆಲನ್‌ಗಳನ್ನು ನೀಡಲು ಅವಕಾಶವಿರುತ್ತದೆ ಹಾಗೂ ಮೋಟಾರು ವಾಹನ ಕಾಯ್ದೆ ಕಲಂ 133ರ ಪ್ರಕಾರ ಎಫ್.ಟಿ.ವಿ.ಆರ್. ನೋಟೀಸ್ಸುಗಳನ್ನು ನೀಡಲಾಗುತ್ತದೆ. |
| (ಆ) | ಸಂಚಾರಿ ಅಪರಾಧಗಳನ್ನು ಮಾಡಿದಾಗ ಮಾತ್ರ ನಿಲ್ಲಿಸಿ ದಂಡ ವಿಧಿಸಬೇಕೇ ಹೊರತು ಸುಮ್ಮನೆ ವಾಹನಗಳನ್ನು ನಿಲ್ಲಿಸಿ ತಪಾಸಣೆ ಮಾಡಿ ನಾಗರೀಕರಿಗೆ ತೊಂದರೆ ಕೊಡಬಾರದೆಂದು ಬೆಂಗಳೂರು ನಗರ ಪೊಲೀಸ್ ಆಯುಕ್ತರು ಆದೇಶ ಹೊರಡಿಸಿರುವುದು ನಿಜವೇ ; ಇದ್ದರೆ, ಆದೇಶದ ಪ್ರತಿ ಒದಗಿಸುವುದು ; | ಸಂಚಾರ ನಿಯಮ ಉಲ್ಲಂಘನೆ ಎಸಗಿರುವುದು ಕಣ್ಣಿಗೆ ಕಂಡು ಬಂದಲ್ಲಿ ಮಾತ್ರ ಚಾಲಕ/ಸವಾರರರನ್ನು ತಡೆದು ಕಾನೂನು ರೀತ್ಯ ಕ್ರಮ ಕೈಗೊಳ್ಳಬೇಕು. ಕೇವಲ ದಾಖಲಾತಿಗಳನ್ನು ತಪಾಸಣೆ ಮಾಡುವ ಸಲುವಾಗಿ ವಿನಾಕಾರಣ ವಾಹನ ನಿಲ್ಲಿಸಕೂಡದು ಎಂದೂ, ಇದು ಮದ್ಯಪಾನ ಮಾಡಿ ವಾಹನ ಚಾಲನೆ ಪ್ರಕರಣಗಳಿಗೆ ಅನ್ವಯಿಸುವುದಿಲ್ಲವೆಂದು ದಿನಾಂಕ:03/01/2017 ರಂದು ಬೆಂಗಳೂರು ನಗರ ಪೊಲೀಸ್ ಆಯುಕ್ತರವರು ಸುತ್ತೋಲೆ-157 ಅನ್ನು ಹೊರಡಿಸಿರುತ್ತಾರೆ. ಸುತ್ತೋಲೆಯ ಪ್ರತಿಯನ್ನು **ಅನುಬಂಧ-1** ರಲ್ಲಿ ಲಗತ್ತಿಸಿದೆ. ಇದೇ ವಿಚಾರವಾಗಿ ಅಪರ ಪೊಲೀಸ್ ಆಯುಕ್ತರು, ಸಂಚಾರ, ಬೆಂಗಳೂರು ರವರು ಸಂಖ್ಯೆ. 118/ಸಿಬಿ/ಅಪರಸಿಪಿ(ಸಂ)/2007-08, ದಿನಾಂಕ:04/06/2008 ರಂದು ಹೊರಡಿಸಿರುವ ಸುತ್ತೋಲೆ-11"ಎ" ರ ಪ್ರತಿಯನ್ನು **ಅನುಬಂಧ-2** ರಲ್ಲಿ ಲಗತ್ತಿಸಿದೆ. |
| (ಇ) | ಹೀಗಿದ್ದರೂ ಪೊಲೀಸರು ವಾಹನಗಳನ್ನು ತಡೆದು ತಪಾಸಣೆ ಮಾಡಿ ತೊಂದರೆ ಕೊಡುತ್ತಿರುವ ಪೊಲೀಸರ ಮೇಲೆ ಸರ್ಕಾರ ಯಾವ ರೀತಿಯ ಕ್ರಮ ಕೈಗೊಳ್ಳಲಿದೆ; ಮತ್ತು ಈ ರೀತಿ ಮಾಡದಂತೆ ನಿರ್ದೇಶನ ನೀಡಲಾಗುವುದೇ ? | ಈ ಸಂಬಂಧ ಸಂಚಾರ ವಿಭಾಗದ ಎಲ್ಲಾ ಅಧಿಕಾರಿ ಮತ್ತು ಸಿಬ್ಬಂದಿಯವರಿಗೆ ಸುತ್ತೋಲೆ-106 ದಿನಾಂಕ:29/12/2012 ರಲ್ಲಿ ಸೂಕ್ತ ನಿರ್ದೇಶನಗಳನ್ನು ನೀಡಿದ್ದು ಸುತ್ತೋಲೆಯ ಪ್ರತಿಯನ್ನು **ಅನುಬಂಧ-3** ರಲ್ಲಿ ಲಗತ್ತಿಸಿದೆ. |

**ಹೆಚ್‌ಡಿ 53 ಎಸ್‌ಎಸ್‌ಟಿ 2020**

**(ಬಸವರಾಜ ಬೊಮ್ಮಾಯಿ)**
**ಗೃಹ ಸಚಿವರು**

ಅನುಬಂಧ - 1.



ಕರ್ನಾಟಕ ಸರ್ಕಾರ
(ಪೊಲೀಸ್ ಇಲಾಖೆ)

ಪೊಲೀಸ್ ಆಯುಕ್ತರವರ ಕಛೇರಿ,
ಇನ್‌ಫೆಂಟ್ರಿ ರಸ್ತೆ, ಬೆಂಗಳೂರು ನಗರ.
ದಿನಾಂಕ:03-01-2017

**ಸು ತ್ತೋ ಲೆ - 157**

**ವಿಷಯ:- ಸಂಚಾರ ಪೊಲೀಸ್‌ರ ಕಾರ್ಯನಿರ್ವಹಣೆ ಬಗ್ಗೆ ಸೂಚನೆಗಳು**

- - -

ಸಂಚಾರ ವಿಭಾಗವು ಬೆಂಗಳೂರು ನಗರ ಪೊಲೀಸ್ ವ್ಯವಸ್ಥೆಯ ಪ್ರಮುಖ ಅಂಗವಾಗಿದ್ದು, ಅತ್ಯಂತ ಜವಾಬ್ದಾರಿಯುತವಾಗಿ ಕರ್ತವ್ಯ ನಿರ್ವಹಿಸಬೇಕಾಗಿದ್ದು ಸಂಚಾರ ಸಂಬಂಧಿ ಸಮಸ್ಯೆಗಳನ್ನು ನಿವಾರಿಸುವ ನಿಟ್ಟಿನಲ್ಲಿ ಈ ಕೆಳಕಂಡಂತೆ ನಿರ್ದೇಶನಗಳನ್ನು ನೀಡಲಾಗಿದೆ.

1. ಸಂಚಾರ ನಿಯಮ ಉಲ್ಲಂಘನೆ ಎಸಗಿರುವುದು ಕಣ್ಣಿಗೆ ಕಂಡುಬಂದಲ್ಲಿ ಮಾತ್ರ ಚಾಲಕ/ಸವಾರರನ್ನು ತಡೆದು ಕಾನೂನು ರೀತ್ಯ ಕ್ರಮ ಕೈಗೊಳ್ಳುವುದು. ಕೇವಲ ದಾಖಲಾತಿಗಳನ್ನು ತಪಾಸಣೆ ಮಾಡುವ ಸಲುವಗಿ ವಿನಾಕಾರಣ ವಾಹನ ನಿಲ್ಲಿಸಕೂಡದು. ಇದು ಮದ್ಯಪಾನ ಮಾಡಿ ವಾಹನ ಚಾಲನೆ ಪ್ರಕರಣಗಳಿಗೆ ಅನ್ವಯಿಸುವುದಿಲ್ಲ. ಇದರ ಪಾಲನೆ ಕಟ್ಟುನಿಟ್ಟಾಗಿ ಆಗಬೇಕು.

2. ನಗರದ ಹಲವಾರು ಜಂಕ್ಷನ್‌ಗಳಲ್ಲಿ ವಾಹನ ಸವಾರರು ಮೀಡಿಯನ್ ದಾಟಿ ವಿರುದ್ಧ ದಿಕ್ಕಿನ ಸಂಚಾರದ ವಿರುದ್ಧವಾಗಿ ಅಪಾಯಕಾರಿ ರೀತಿಯಲ್ಲಿ ಚಾಲನೆ ಮಾಡುವ ಪ್ರಕರಣಗಳು ಇತ್ತೀಚೆಗೆ ಸಾಮಾನ್ಯವಾಗಿದ್ದು (ಉದಾ: ಎಎಸ್‌ಸಿ ಸೆಂಟರ್‌ನಿಂದ ಆರ್.ಎಂ. ರಸ್ತೆ, ರಿಚ್‌ಮಂಡ್ ವೃತ್ತದಲ್ಲಿ ವಿ.ಟಿ.ಸಿ ಗಾರ್ಡೇನಿಯಾ ಕಡೆಯಿಂದ ಶಾಂತಿನಗರ ಕಡೆಗೆ ಸಾಗುವ ವಾಹನಗಳು) ಇಂತಹ ಅಪಾಯಕಾರಿ ಅಭ್ಯಾಸವನ್ನು ಅನಿರೀಕ್ಷಿತ ತಪಾಸಣೆಗಳನ್ನು ಹಮ್ಮಿಕೊಂಡು ಪರಿಣಾಮಕಾರಿಯಾಗಿ ಕ್ರಮ ತೆಗೆದುಕೊಳ್ಳುವ ಮೂಲಕ ತಡೆಗಟ್ಟುವುದು.

3. ಹಲವಾರು ಪ್ರಮುಖ ಸಮಸ್ಯೆಗಳನ್ನು ಪ್ರಾಥಮಿಕ ಹಂತದಲ್ಲಿಯೇ ಗುರುತಿಸಿ ಸರಿಪಡಿಸಿದಲ್ಲಿ ಅವುಗಳಿಂದ ಉಂಟಾಗಬಹುದಾದ ಗುರುತರ ಸಮಸ್ಯೆಗಳನ್ನು ಯಶಸ್ವಿಯಾಗಿ ನಿಭಾಯಿಸಲು ಸಾಧ್ಯವಾಗುತ್ತದೆ. ಇದನ್ನು Broken Window Theory ಎಂದು ಕರೆಯಲಾಗುತ್ತದೆ. ಇದರ ಅನ್ವಯತೆ ಸಂಚಾರ ವಿಭಾಗಕ್ಕೆ ಬಹಳ ಅತ್ಯವಶ್ಯಕವಾಗಿದ್ದು ಇದನ್ನು ಪ್ರತಿಯೊಬ್ಬ ಅಧಿಕಾರಿಯು ಸರಿಯಾಗಿ ಅಧ್ಯಯನ ಮಾಡಿ ತಾವುಗಳು ಯಾವ ರೀತಿಯಲ್ಲಿ ಈ ಸಿದ್ಧಾಂತದ ಉಪಯೋಗವನ್ನು ಪಡೆದುಕೊಂಡು ಸಾರ್ವಜನಿಕರು ಮೆಚ್ಚುವ ರೀತಿಯಲ್ಲಿ ಕೆಲಸ ನಿರ್ವಹಿಸಲು ಸಾಧ್ಯವಾಗುವುದೆಂದು ಆತ್ಮಾವಲೋಕನ ಮಾಡಿಕೊಳ್ಳಬೇಕು.

ಸಂಚಾರ ವಿಭಾಗಕ್ಕೆ ಸಂಬಂಧಿಸಿದಂತೆ ಹೇಳುವುದಾದರೆ.

- ಸ್ಟಾಪ್‌ಲೈನ್‌ನಿಂದ ಮುಂದೆ ಬರುವ ವಾಹನಗಳನ್ನು ತಡೆಯುವುದು ಹಾಗೂ ಅವರುಗಳು ಆ ರೀತಿ ಬರದಂತೆ ತಿಳಿಹೇಳುವುದು.
- ವೆಲ್ ಆಫ್ ದಿ ಜಂಕ್ಷನ್‌ನಲ್ಲಿ ಒಂದು ದಿಕ್ಕಿನಿಂದ ಬಂದ ವಾಹನಗಳು ಮುಂದೆ ಹೋಗದೆ ಬ್ಲಾಕ್ ಮಾಡುವ ಕ್ರಿಯೆಯನ್ನು ತಡೆಗಟ್ಟುವುದು.
- ವೆಲ್ ಆಫ್ ದಿ ಜಂಕ್ಷನ್ ಯಾವಾಗಲೂ ಮುಕ್ತವಾಗಿರುವಂತೆ ಕ್ರಿಸ್-ಕ್ರಾಸ್ ರಸ್ತೆ ಮಾರ್ಕಿಂಗ್‌ಗಳನ್ನು ಮಾಡುವುದು. ಜಂಕ್ಷನ್ ಗ್ರಿಡ್-ಲಾಕ್ ಆಗದಂತೆ ನೋಡಿಕೊಳ್ಳುವುದು ಮತ್ತು ಇದಕ್ಕೆ ಅನುಗುಣವಾಗಿ ಸಿಗ್ನಲ್ ಲೈಟ್‌ಗಳ ಟೈಮಿಂಗ್ ಅವಧಿಯನ್ನು ವೈಜ್ಞಾನಿಕವಾಗಿ ನಿರ್ಧರಿಸುವುದು.
- ಜೀಬ್ರಾ ಕ್ರಾಸಿಂಗ್‌ಗಳ ಮೇಲೆ ಯಾವುದೇ ರೀತಿಯ ವಾಹನ ನಿಲ್ಲುಗಡೆಯಾಗದಂತೆ ನೋಡಿಕೊಳ್ಳತಕ್ಕದ್ದು. ಜೀಬ್ರಾ ಕ್ರಾಸಿಂಗ್ ಕೇವಲ ಪಾದಚಾರಿಗಳಿಗೆ ಮಾತ್ರ ಮೀಸಲಿಡತಕ್ಕದ್ದು.
- ಸಂಚಾರವು ಕೇವಲ ಒಂದೇ ಕಡೆಯಿಂದ ಮತ್ತೊಂದು ಕಡೆಗೆ ಸತತವಾಗಿ ಹೋಗುವ ಅಥವಾ ಕಳುಹಿಸುವ ಪರಿಪಾಠವನ್ನು ನಿಲ್ಲಿಸಿ ಪಾಕೇಟ್‌ಗಳಲ್ಲಿ ಸ್ವಲ್ಪ ಸ್ವಲ್ಪವಾಗಿ ಹರಿಯುವಂತೆ ಕ್ರಮ ಕೈಗೊಳ್ಳಲು ಜಂಕ್ಷನ್ ಪಾಕಿಗಳಿಗೆ ತಿಳುವಳಿಕೆ ನೀಡುವುದು.
- ಸಂಚಾರದ ನಿಯಮಗಳ ಬಗ್ಗೆ ಆಗಾಗ್ಗೆ ಜಾಹೀರಾತುಗಳನ್ನು ನೀಡುವುದು. ಎಫ್.ಎಂ ಮುಖಾಂತರ ಸಾರ್ವಜನಿಕರಿಗೆ ಅರಿವು ಮೂಡಿಸುವ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುವುದು.

4. ಸಾರ್ವಜನಿಕರೊಂದಿಗೆ ಸಂಚಾರ ವಿಭಾಗದ ಅಧಿಕಾರಿಗಳು ಸಾಕಷ್ಟು ಸಂಯಮ ಮತ್ತು ತಾಳ್ಮೆಯಿಂದ ವರ್ತಿಸಬೇಕು. ಆದರೆ ಕಾನೂನು ಜಾರಿ ವೇಳೆಯಲ್ಲಿ ಕಟ್ಟುನಿಟ್ಟಾಗಿ ಆದರೆ ವಿನಯಪೂರ್ವಕವಾಗಿ ಪ್ರಕರಣಗಳನ್ನು ದಾಖಲಿಸಬೇಕು. ಮದ್ಯಪಾನ ಮಾಡಿ ವಾಹನ ಚಲಾಯಿಸುವವರ ವಿರುದ್ಧ ಪ್ರಕರಣಗಳನ್ನು ದಾಖಲಿಸುವಾಗ ಕನಿಷ್ಠ 2 ಆಲ್ಕೋ ಮೀಟರ್‌ಗಳನ್ನು ಕಾರ್ಯಾಚರಣೆ ವೇಳೆ ಇಟ್ಟುಕೊಂಡಲ್ಲಿ ಸಾರ್ವಜನಿಕರು ಆಲ್ಕೋಮೀಟರ್ ರೀಡಿಂಗ್ ಬಗ್ಗೆ ಅನುಮಾನ ವ್ಯಕ್ತಪಡಿಸಿದಲ್ಲಿ ಮತ್ತೊಂದು ಆಲ್ಕೋಮೀಟರ್‌ನಿಂದ ಪರಿಶೀಲಿಸಲು ಅವಕಾಶ ಕಲ್ಪಿಸಬೇಕು. ಆಲ್ಕೋಮೀಟರ್ ಬಳಕೆಯಲ್ಲಿ ಉಪಯೋಗಿಸುವ ಸ್ಟ್ರಾಗಳನ್ನು ಪ್ಲಾಸ್ಟಿಕ್ ರ್‍ಯಾಪರ್‌ಗಳಿಂದ ತಪಾಸಣೆಗೆ ಒಳಪಡುವ ವ್ಯಕ್ತಿಯೇ ತೆರೆಯುವಂತೆ ಅವಕಾಶ ಮಾಡಿಕೊಡಬೇಕು. ಹೀಗೆ ಮಾಡಿದಲ್ಲಿ ಒಂದೇ ಸ್ಟ್ರಾ ವನ್ನು ಹಲವಾರು ಜನರಿಗೆ ಉಪಯೋಗಿಸುತ್ತಾರೆಂಬ ತಪ್ಪು ಗ್ರಹಿಕೆಯನ್ನು ಸಾರ್ವಜನಿಕರಲ್ಲಿ ನಿವಾರಿಸಬಹುದು.

5. ಬಿ-ಟ್ರ್ಯಾಕ್ ಯೋಜನೆಯು ಬಹಳ ಮಹತ್ವಾಕಾಂಕ್ಷೆಯಾದ ಯೋಜನೆಯಾಗಿದ್ದು ತಾಂತ್ರಿಕ ಪ್ರಬುದ್ಧತೆಯಿಂದ ರಾಷ್ಟ್ರದಲ್ಲಿಯೇ ಮಾದರಿಯಾಗಿ ಸಂಚಾರ ನಿರ್ವಹಣೆಯಲ್ಲಿ ಸಾಕಷ್ಟು ಪ್ರಗತಿಯನ್ನು ಸಾಧಿಸಿದ್ದು ಕೆಲವೊಂದು ಲೋಪದೋಷಗಳನ್ನು ಸರಿಪಡಿಸಿಕೊಂಡಲ್ಲಿ ಉತ್ತಮವಾಗಿ ಸೇವೆಯನ್ನು ನೀಡುವಲ್ಲಿ ಸಹಕಾರಿಯಾಗಲಿದ್ದು:-

   - ವಿವಿಪಿ ರವರುಗಳ ಮೂವ್‌ಮೆಂಟ್‌ಗಳನ್ನು, ತುರ್ತು ಸೇವಾ ವಾಹನಗಳ ಸಂಚರಣೆ ಸಮಯದಲ್ಲಿ, ವಿಷಮ (Crisis) ಪರಿಸ್ಥಿತಿ ನಿಭಾಯಿಸುವ ಸಮಯವನ್ನು ಹೊರತುಪಡಿಸಿ ಬೇರೆ ಸಮಯದಲ್ಲಿ ವಿನಾಕಾರಣ ಆಟೋಮೋಡ್‌ನಲ್ಲಿರುವ ಸಿಗ್ನಲ್‌ಗಳನ್ನು ಟ್ಯಾಂಪರ್ ಮಾಡಿ ಮ್ಯಾನ್ಯುಯಲ್ ಮೋಡ್‌ನಲ್ಲಿ ಆಪರೇಟ್ ಮಾಡುವುದನ್ನು ಈ ತಕ್ಷಣದಿಂದ ನಿಲ್ಲಿಸಬೇಕು.

- ಜಂಕ್ಷನ್ ಜಾಕಿಗಳು / ಹೋಂಗಾರ್ಡ್‌ಗಳು ಮ್ಯಾನ್ಯುಯಲ್ ಮೋಡ್‌ನಲ್ಲಿ ಒಂದೇ ದಿಕ್ಕಿನ ವಾಹನಗಳನ್ನು ಕ್ಲಿಯರ್ ಮಾಡುತ್ತಿರುವುದರಿಂದ ಮುಂದಿನ ಜಂಕ್ಷನ್‌ಗಳಲ್ಲಿ ಸಂಚಾರ ದಟ್ಟಣೆ ಹೆಚ್ಚಿ ಗ್ರಿಡ್-ಲಾಕ್ ಆಗುವುದಕ್ಕೆ ಪ್ರಮುಖ ಕಾರಣವಾಗುತ್ತದೆ ಎಂಬ ಅಂಶವನ್ನು ಎಲ್ಲರೂ ಮನಸ್ಸಿನಲ್ಲಿ ಇಟ್ಟುಕೊಳ್ಳಬೇಕು

- ಸಿಗ್ನಲ್ ಸೈಕಲ್ ಟೈಮಿಂಗ್‌ಗಳು ಅಂತರಾಷ್ಟ್ರೀಯ ಮಟ್ಟದಲ್ಲಿ ಸಾಮಾನ್ಯವಾಗಿ 180 ಸೆಕೆಂಡ್‌ಗಳಿಗೆ ಸೀಮಿತವಾಗಿದ್ದು ಬೆಂಗಳೂರು ನಗರವನ್ನು ಗಮನದಲ್ಲಿಟ್ಟುಕೊಂಡು ಗರಿಷ್ಠ 240 ಸೆಕೆಂಡ್‌ಗಳ ಸಿಗ್ನಲ್ ಸೈಕಲ್ ಟೈಮಿಂಗ್ ಅನ್ನು ಅಳವಡಿಸತಕ್ಕದ್ದು. ಆದಾಗ್ಯೂ ಕೆಲವೊಂದು ಜಂಕ್ಷನ್‌ಗಳಲ್ಲಿ ಸುಮಾರು 5 ನಿಮಿಷಕ್ಕಿಂತಲೂ ಹೆಚ್ಚು ಟೈಮಿಂಗ್ ನೀಡಲಾಗಿದ್ದು ಸಂಬಂಧಪಟ್ಟ ಇನ್ಸ್‌ಪೆಕ್ಟರ್‌ಗಳು ಇವುಗಳನ್ನು ಪರಿಶೀಲಿಸಿ ಸರಿಪಡಿಸಲು ಕ್ರಮ ಕೈಗೊಳ್ಳುವುದು.

- ಈ ಹಿಂದೆ ಬೆಂಗಳೂರು ನಗರದಲ್ಲಿ ವಿವಿಧ ರಸ್ತೆಗಳಲ್ಲಿ ಅವ್ಯಾಹತವಾಗಿ ಎಲ್ಲೆಂದರಲ್ಲಿ ವಾಹನಗಳ ತಪ್ಪು ನಿಲುಗಡೆಯಾಗುತ್ತಿದ್ದು ಸಾಮಾನ್ಯವಾಗಿ ದ್ವಿಚಕ್ರ ವಾಹನಗಳನ್ನು ಮಾತ್ರ ಟೋ ಮಾಡಲಾಗುತ್ತಿದ್ದು ಈಗ ಕಾರುಗಳನ್ನೂ ಹೆಚ್ಚಿನ ಸಂಖ್ಯೆಯಲ್ಲಿ ಟೋ ಮಾಡುತ್ತಿರುವುದು ಒಳ್ಳೆಯ ಬೆಳವಣಿಗೆಯೆಂದು ತಿಳಿಸಿ ಕ್ಯಾಬ್‌ಗಳು ಬೆಂಗಳೂರು ನಗರದ ಪ್ರಮುಖ ರಸ್ತೆಗಳಲ್ಲಿ ನಿಲುಗಡೆ ಮಾಡುತ್ತಿದ್ದು ಸಂಚಾರಕ್ಕೆ ಬಹಳ ಅಡ್ಡಿ ಉಂಟು ಮಾಡುತ್ತಿರುವ ಹಿನ್ನೆಲೆಯಲ್ಲಿ ಇವುಗಳ ವಿರುದ್ಧ ಸೂಕ್ತ ಕ್ರಮ ಕೈಗೊಂಡು ತಪ್ಪು ನಿಲುಗಡೆಯನ್ನು ತಪ್ಪಿಸಬೇಕು.

- ಕೆಲವು ಪಾರ್ಕಿಂಗ್ ಪ್ರದೇಶಗಳು ವಾಹನಗಳ ನಿಲುಗಡೆ ಇಲ್ಲದೆ ಇದ್ದು, ಅಂತಹ ಪ್ರದೇಶಗಳಲ್ಲಿ ಅದರಲ್ಲೂ ಮುಖ್ಯವಾಗಿ ಬಿ.ಎಂ.ಟಿ.ಸಿ ವತಿಯಿಂದ ಅಥವಾ ಖಾಸಗಿ ಮಾಲ್‌ಗಳಲ್ಲಿ ನಿಲುಗಡೆ ಜಾಗ ಲಭ್ಯವಿದ್ದಲ್ಲಿ ಉಗ್ರ ಕ್ರಮ ಕೈಗೊಂಡು ಕಡ್ಡಾಯವಾಗಿ ವಾಹನಗಳು ಪಾರ್ಕಿಂಗ್ ಲಾಟ್‌ನಲ್ಲಿಯೇ ನಿಲುಗಡೆಯಾಗುವಂತೆ ನೋಡಿಕೊಳ್ಳುವುದು.

- ಪೊಲೀಸ್ ಕರ್ತವ್ಯ ನಿರ್ವಹಿಸುವ ಸಮವಸ್ತ್ರಧಾರಿಗಳು ಸಂಚಾರ ನಿಯಮವನ್ನು ಉಲ್ಲಂಘಿಸುವ ಪ್ರಕರಣಗಳನ್ನು ಗಂಭೀರವಾಗಿ ಪರಿಗಣಿಸಿ ನಿಯಮ ಉಲ್ಲಂಘಿಸುವ ಸಿಬ್ಬಂದಿಗೆ ಸ್ಥಳದಲ್ಲಿಯೇ ದಂಡ ಕಟ್ಟಿಸಿಕೊಳ್ಳಬೇಕು. ಅವರಿಗೆ ಪೊಲೀಸ್ ನೋಟೀಸ್ ನೀಡುವ ಅವಶ್ಯಕತೆ ಇರುವುದಿಲ್ಲ. ಸಂಚಾರ ವಿಭಾಗದ ಅಧಿಕಾರಿ ಸಿಬ್ಬಂದಿಗಳು ನಿಯಮ ಉಲ್ಲಂಘನೆ ಮಾಡದಂತೆ ಇತರರಿಗೆ ಮಾದರಿಯಾಗಿ ಇರುವಂತೆ ನೋಡಿಕೊಳ್ಳುವುದು.

6. ನಗರದ ಹಲವಾರು ಪ್ರಮುಖ ರಸ್ತೆಗಳಲ್ಲಿ ಫ್ಲೈಓವರ್‌ಗಳು ನಿರ್ಮಾಣವಾಗಿದ್ದು ಇಲ್ಲಿ ಸಂಚಾರವು ಸುಗಮವಾಗಿ ಸಾಗುತ್ತಿದ್ದು ಸರಹದ್ದಿನ ಅಧಿಕಾರಿಗಳು ಫ್ಲೈಓವರ್ ಕೆಳಗಡೆ ಉಲ್ಬಣಗೊಂಡಿರುವ ಸಂಚಾರ ಸಮಸ್ಯೆಗಳನ್ನು ಪರಿಹರಿಸುವ ಬಗ್ಗೆ ಹೆಚ್ಚಿನ ಗಮನ ವಹಿಸಬೇಕು.

7. ಕಾನೂನು ಜಾರಿ ಸಮಯದಲ್ಲಿ ಸಾರ್ವಜನಿಕರೊಂದಿಗೆ/ಉಲ್ಲಂಘನೆದಾರರೊಂದಿಗೆ ಸಂಘರ್ಷಕ್ಕೆ ಇಳಿಯದ ಕಾನೂನು ಬದ್ಧವಾಗಿರುವ ಕ್ರಮವನ್ನು ಕೈಗೊಳ್ಳಬೇಕು. ಮತ್ತು ಸಂಚಾರ ವಿಭಾಗದ ಅಧಿಕಾರಿ ಸಿಬ್ಬಂದಿಗಳು ಸಾರ್ವಜನಿಕರೊಂದಿಗೆ ಒಳ್ಳೆಯ ನಡವಳಿಕೆಯಿಂದ ನಡೆದುಕೊಳ್ಳಬೇಕು. ಅವಾಚ್ಯ ಶಬ್ದಗಳನ್ನು ಉಪಯೋಗಿಸದಂತೆ ಎಚ್ಚರಿಕೆ ವಹಿಸಬೇಕು. ಈ ಬಗ್ಗೆ ಆಧೀನ ಸಿಬ್ಬಂದಿಯವರಿಗೂ ಸಹ ಮನವರಿಕೆ ಮಾಡಿಕೊಡಬೇಕು.

8. ಬಿ-ಟ್ರ್ಯಾಕ್ ಯೋಜನೆ ಅಡಿಯಲ್ಲಿ ಸಾರ್ವಜನಿಕರಲ್ಲಿ ಸಂಚಾರ ನಿಯಮಗಳಿಗೆ ಸಂಬಂಧಿಸಿದಂತೆ ಅರಿವು ಮೂಡಿಸುವ ಕಾರ್ಯಕ್ರಮಗಳನ್ನು ಹೆಚ್ಚು ಹೆಚ್ಚು ಹಮ್ಮಿಕೊಳ್ಳಬೇಕು ಹಾಗೂ ದಿನಪತ್ರಿಕೆಗಳಲ್ಲೂ ಸಹ ಸಾಕಷ್ಟು ಪ್ರಚಾರ ನೀಡಲು ಕ್ರಮ ಕೈಗೊಳ್ಳಬೇಕು. ಈ ನಿಟ್ಟಿನಲ್ಲಿ ಡಿಸಿಪಿ ಸಂಚಾರ ಪೂರ್ವ ರವರು ಹೋರ್ಡಿಂಗ್ಸ್‌ಗಳ ವಿನ್ಯಾಸವನ್ನು ಸಿದ್ಧಪಡಿಸಲು ಕ್ರಮ ಕೈಗೊಳ್ಳಲು ಸೂಚಿಸಲಾಯಿತು.

9. ರಸ್ತೆಯಲ್ಲಿ ಗಾಯಗೊಂಡ ಅಥವಾ ಅಪಘಾತ ಪ್ರಕರಣಗಳಲ್ಲಿ ಸಿಲುಕಿಕೊಂಡ ವ್ಯಕ್ತಿಗಳ ನೆರವಿಗೆ ಧಾವಿಸುವವರ (Good Samaritans) ರಕ್ಷಣೆಯ ಬಗ್ಗೆ ಪರಮಾನಂದ್ ಕಟಾರ V/s ಭಾರತ ಸರ್ಕಾರ ಪ್ರಕರಣದಲ್ಲಿ ಘನ ಸರ್ವೋಚ್ಚ ನ್ಯಾಯಾಲಯವು ಹೊರಡಿಸಿರುವ ಮಾರ್ಗಸೂಚಿಗಳನ್ನು ತಪ್ಪದೇ ಅನುಸರಿಸುವುದು ಹಾಗೂ ಈ ಬಗ್ಗೆ ಅಧೀನ ಸಿಬ್ಬಂದಿಯವರಿಗೂ ಸಹ ಅರಿವು ಮೂಡಿಸುವುದಲ್ಲದೆ ಸಾರ್ವಜನಿಕರಿಗೆ ತಿಳಿಯುವಂತೆ ವ್ಯಾಪಕ ಪ್ರಚುರಪಡಿಸಬೇಕು.

10. ಠಾಣಾಧಿಕಾರಿಗಳು ಜಂಕ್ಷನ್‌ಗಳಲ್ಲಿ ಕರ್ತವ್ಯ ನಿರ್ವಹಿಸುವ ಸಿಬ್ಬಂದಿಗೆ ಹಾಗೆ ಮಾಡಬಾರದು? ಹೀಗೆ ಮಾಡಬಾರದು? ಎಂದು ಹೇಳುತ್ತಾರೆಯೇ ವಿನಃ ಏನು ಮಾಡಬೇಕು? ಹೇಗೆ ಮಾಡಬೇಕು? ಎಂಬುದರ ಬಗ್ಗೆ ಮಾರ್ಗದರ್ಶನ ನೀಡದಿರುವ ಬಗ್ಗೆ ಅಸಮಾಧಾನ ವ್ಯಕ್ತಪಡಿಸಿ ಮುಂದಿನ ದಿನಗಳಲ್ಲಿ ಠಾಣಾಧಿಕಾರಿಗಳು ಮತ್ತು ಮೇಲ್ವಿಚಾರಣಾ ಅಧಿಕಾರಿಗಳು ನಿರಂತರವಾಗಿ ಕೆಲಸಕಾರ್ಯಗಳ ಬಗ್ಗೆ ಸೂಕ್ತ ಮಾರ್ಗದರ್ಶನ ನೀಡಬೇಕು.

11. ಸಾರ್ವಜನಿಕರಿಂದ ಸಾಮಾನ್ಯವಾಗಿ ಕೇಳಿಬರುವ ದೂರು ಎಂದರೆ ಸಂಚಾರ ವಿಭಾಗದ ಅಧಿಕಾರಿ ಮತ್ತು ಸಿಬ್ಬಂದಿಯವರು ಹೆಚ್ಚಾಗಿ ರಸ್ತೆ ಮೇಲೆ ಕಂಡುಬರುವುದಿಲ್ಲ. ಆದ್ದರಿಂದ ಈ ಅಭಿಪ್ರಾಯವನ್ನು ಹೋಗಲಾಡಿಸಲು ಅಧಿಕಾರಿ ಸಿಬ್ಬಂದಿಯವರು ಹೆಚ್ಚು ಹೆಚ್ಚಾಗಿ ತಮ್ಮನ್ನು ಸಂಚಾರ ನಿರ್ವಹಣೆ ಮತ್ತು ನಿಯಂತ್ರಣ ಕರ್ತವ್ಯದಲ್ಲಿ ತೊಡಗಿಸಿಕೊಂಡು ಕರ್ತವ್ಯ ನಿರ್ವಹಿಸುವುದು.

12. ಸುಗಮ ಸಂಚಾರ ವ್ಯವಸ್ಥೆಯನ್ನು ಕಲ್ಪಿಸುವ ನಿಟ್ಟಿನಲ್ಲಿ ಯಾವುದೇ ಕ್ರಮಗಳನ್ನು ಕೈಗೊಳ್ಳದೆ ಕರ್ತವ್ಯದಲ್ಲಿ ಉದಾಸೀನತೆ, ಬೇಜವಾಬ್ದಾರಿ ತೋರಿದಲ್ಲಿ ವಿಷಯವನ್ನು ಗಂಭೀರವಾಗಿ ಪರಿಗಣಿಸಿ ಸಂಬಂಧಿಸಿದವರ ವಿರುದ್ಧ ಶಿಸ್ತು ಕ್ರಮ ಜರುಗಿಸಲಾಗುವುದು.

13. ಸಿಬ್ಬಂದಿಗಳು ಕರ್ತವ್ಯ ನಿರ್ವಹಿಸುವ ವೇಳೆಯಲ್ಲಿ ತಮ್ಮ ಸುರಕ್ಷತೆಯ ದೃಷ್ಟಿಯಿಂದ ಸೂರ್ಯಾಸ್ತದ ನಂತರ reflective Jacket ಅನ್ನು ಕಡ್ಡಾಯವಾಗಿ ಧರಿಸತಕ್ಕದ್ದು. ಠಾಣಾಧಿಕಾರಿಗಳು ಈ ಬಗ್ಗೆ ಸೂಕ್ತ ನಿಗಾ ವಹಿಸತಕ್ಕದ್ದು.

ಸುಗಮ ಸಂಚಾರ ಹಾಗೂ ಸಾರ್ವಜನಿಕರ ಸುರಕ್ಷತೆ ಆದ್ಯತೆಗಳಾಗಿದ್ದು ಮುಂದಿನ 6 ತಿಂಗಳಲ್ಲಿ ಈಗಾಗಲೇ ನೀಡಿರುವ ಸರಳ ಮತ್ತು ಪರಿಣಾಮಕಾರಿ ನಿರ್ದೇಶನಗಳನ್ನು ಯಶಸ್ವಿಯಾಗಿ ಜಾರಿಗೆ ತರುವಲ್ಲಿ ಎಲ್ಲರೂ ಶ್ರಮಿಸತಕ್ಕದ್ದು.

(ಪ್ರವೀಣ್ ಸೂದ್)
ಪೊಲೀಸ್ ಆಯುಕ್ತರು,
ಬೆಂಗಳೂರು ನಗರ.

ಗೆ,

ಎಲ್ಲಾ ಪೊಲೀಸ್ ಇನ್ಸ್‌ಪೆಕ್ಟರ್‌ರವರುಗಳಿಗೆ

ಪ್ರತಿಗಳನ್ನು ಮಾಹಿತಿಗಾಗಿ:

1. ಸಂಚಾರ ಉಪ ವಿಭಾಗಗಳ ಎಲ್ಲಾ ಸಹಾಯಕ ಪೊಲೀಸ್ ಆಯುಕ್ತರುಗಳಿಗೆ.
2. ಉಪ ಪೊಲೀಸ್ ಆಯುಕ್ತರು, ಸಂಚಾರ ಪೂರ್ವ, ಪಶ್ಚಿಮ & ಉತ್ತರ ವಿಭಾಗ, ಬೆಂಗಳೂರು ನಗರ.

ಪ್ರತಿಯನ್ನು ಅಭಿನಂದನೆಗಳೊಂದಿಗೆ: ಪೊಲೀಸ್ ಆಯುಕ್ತರು, ಬೆಂಗಳೂರು ನಗರ ರವರ ಮಾಹಿತಿಗಾಗಿ.

ಅನುಬಂಧ - 2 (6)

Office of the
Addl. Commissioner of Police,
(Traffic)
BMTC Complex 2nd Floor,
Shivajinagar Bus Stand,
Bangalore-560 0057.
Dated: 04-06-2008.

No. 118/CB/Addl.CP.Tr./2007-08,

## CIRCULAR - 11. - A

I am receiving complaints that road users are being stopped by traffic police merely for checking records in the name of enforcement and collection of fine. This is not acceptable.

Enforcement through fine collection is intended for discouraging traffic violation and enhancing road safety and not as a tool for revenue collection. No person shall be stopped unless he has violated any traffic rule which endangers road safety. Once prosecuted for traffic violations, you can also check his D.L. But if he is driving normally there is no justification for stopping anybody in name of vehicle checking.

The objective of fine collection is to reduce the chaos on the roads and enhance safety and not collecting revenue for the government.

Non-compliance of these instructions will be viewed seriously and disciplinary action initiated against concerned. Kindly convey it to all the traffic police personnel working under you without fail.

(PRAVEEN SOOD)
Additional Commissioner of Police,
Traffic, Bangalore City.

To

All the Police Inspectors, Traffic, Bangalore.
All the Asst. Commissioners of Police, Traffic, Bangalore City.

Copy to: The Dy. Commissioners of Police, Traffic, East & West

Copy with compliments to:
The Commissioner of Police, Bangalore City, for kind information.



ಅನುಬಂಧ-3



ಕರ್ನಾಟಕ ಸರ್ಕಾರ

(ಪೊಲೀಸ್ ಇಲಾಖೆ)

ಅಪರ ಪೊಲೀಸ್ ಆಯುಕ್ತರವರ ಕಛೇರಿ,
ಸಂಚಾರ, 2ನೇ ಮಹಡಿ, ಬಿಎಂಟಿಸಿ ಕಾಂಪ್ಲೆಕ್ಸ್,
ಶಿವಾಜಿನಗರ, ಬೆಂಗಳೂರು ನಗರ,
ದಿನಾಂಕ: 29ನೇ ಡಿಸೆಂಬರ್, 2012.

## ಸು ತ್ತೋ ಲೆ– 106

ಮಾನ್ಯ ಮಹಾ ನಿರ್ದೇಶಕರು ಮತ್ತು ಪೊಲೀಸ್ ಮಹಾ ನಿರೀಕ್ಷಕರು, ಕರ್ನಾಟಕ ರಾಜ್ಯ, ಬೆಂಗಳೂರು ರವರಿಂದ ಸಂಖ್ಯೆ. ಪಿಎಸ್(10)7/ಡಿಜಿ & ಐಜಿಪಿ/2012 ದಿನಾಂಕ: 24–12–2012 ರಲ್ಲಿ ಬಂದಂತ ಟಿಪ್ಪಣಿಯಲ್ಲಿ ಸಂಚಾರ ಪೊಲೀಸರು ಕರ್ತವ್ಯ ನಿರ್ವಹಿಸುವಾಗ ಸಾರ್ವಜನಿಕರೊಂದಿಗೆ ಅಸಭ್ಯವಾಗಿ ನಡೆದುಕೊಳ್ಳುತ್ತಿರುವ ವಿಚಾರ, ಅಕ್ರಮ ಸಂಭಾವನೆಗೆ ಒತ್ತಾಯ, ಎಎಸ್ಐ ಮೇಲ್ಪಟ್ಟ ಅಧಿಕಾರಿಗಳು ಸಂಚಾರ ನಿಯಮ ಉಲ್ಲಂಘನೆಗಳಿಗೆ ನಿಗಧಿಯಾಗಿರುವ ದಂಡದ ವಿವರಗಳ ಪಟ್ಟಿಯನ್ನು ಇಟ್ಟುಕೊಳ್ಳದೇ ಇರುವುದು, ಎಎಸ್ಐ ಅಥವಾ ಪಿಎಸ್ಐ ಮೇಲ್ಪಟ್ಟ ಅಧಿಕಾರಿಗಳ ಅನುಪಸ್ಥಿತಿಯಲ್ಲಿ ಪಿಸಿ ಮತ್ತು ಹೆಚ್‌ಸಿ ರವರು ಅನಧಿಕೃತವಾಗಿ ವಾಹನಗಳನ್ನು ತಡೆದು ತಪಾಸಣೆ ಮಾಡುವುದು ಇತ್ಯಾದಿಗಳ ಬಗ್ಗೆ ಗಂಭೀರವಾಗಿ ಟೀಕೆಗಳನ್ನು ಮಾಡಿರುತ್ತಾರೆ. ಟೀಕೆಗಳ ಸಂಬಂಧ ನಿಯಮಗಳ ಜಾರಿ ಪ್ರಕ್ರಿಯೆಯು ಎಎಸ್ಐ ಮೇಲ್ಪಟ್ಟ ಅಧಿಕಾರಿಗಳ ಉಪಸ್ಥಿತಿಯಲ್ಲಿಯೇ ನಡೆಯುವಂತಾಗಬೇಕು ಮತ್ತು ಸೂಕ್ತ ಮೇಲ್ವಿಚಾರಣೆ ಮಾಡುವ ಮೂಲಕ ಇದನ್ನು ಖಚಿತಪಡಿಸಿಕೊಳ್ಳುವುದು ಅವಶ್ಯಕವಾಗಿರುತ್ತದೆ.

ಬೇರೆ ಇಲಾಖೆಯ ಕಾರ್ಯಚಟುವಟಿಕೆಗಳಿಗಿಂತ ಪೊಲೀಸ್ ಇಲಾಖೆಯಲ್ಲಿ ಕೆಲಸಕಾರ್ಯಗಳು ವಿಭಿನ್ನವಾಗಿರುತ್ತದೆ. ದುಷ್ಟಶಕ್ತಿಗಳನ್ನು ಮತ್ತು ನಿಯಮ ಉಲ್ಲಂಘನೆದಾರರನ್ನು ಕಾನೂನು ಚೌಕಟ್ಟಿನಲ್ಲಿ ಸಿಲುಕಿಸಿ ನ್ಯಾಯಾಂಗದ ಗಮನಕ್ಕೆ ತರಬೇಕಾದುದು ಪೊಲೀಸ್ ಇಲಾಖೆಯ ಮುಖ್ಯ ಕರ್ತವ್ಯ. ಈ ದಿಸೆಯಲ್ಲಿ ಪೊಲೀಸ್ ನೌಕರರು ತಮ್ಮ ನಡವಳಿಕೆಯನ್ನು ಆದರ್ಶವಾಗಿಟ್ಟುಕೊಂಡಿರಬೇಕು.



ಸಂಚಾರ ನಿಯಮ ಉಲ್ಲಂಘನೆಗಳಲ್ಲಿ ಎಲ್ಲಾ ವರ್ಗದ ಜನರು ಅಪರಾಧಿಗಳಾಗುತ್ತಾರೆ. ಕೆಳವರ್ಗದವರು, ಮೇಲ್ವರ್ಗದವರು, ವಿದ್ಯಾವಂತರು, ಅವಿದ್ಯಾವಂತರು, ಬಡವರು, ಶ್ರೀಮಂತರು, ಅಧಿಕಾರಿಗಳು ಹೀಗೆ ಹಲವು ವಿಧವಾದ ರೀತಿಯ ವ್ಯಕ್ತಿಗಳು ಅಪರಾಧಿಗಳಾಗಿ ಬರುವುದನ್ನು ನಾವು ಕಾಣಬಹುದು. ಆ ಕಾರಣದಿಂದಲೇ ಅಂತಹವರ ಜೊತೆ ಹೇಗೆ ವರ್ತಿಸಬೇಕೆಂದು ನಾವು ಕಲಿಯಬೇಕಾಗಿದೆ. ಅಲ್ಲದೆ ಅಂತಹ ಅಪರಾಧಗಳು ನಡೆಯುವುದು ರಸ್ತೆಯ ಮೇಲೆ ಸಾರ್ವಜನಿಕ ಸ್ಥಳದಲ್ಲಿಯೇ ಅವರನ್ನು ಪೊಲೀಸರು ಭೇಟಿಯಾಗುವುದು. ಅಲ್ಲಿ ಅವರೊಡನೆ ವರ್ತಿಸುವ ರೀತಿಯನ್ನು ಸಾರ್ವಜನಿಕರು ಬಹಿರಂಗವಾಗಿ ಗಮನಿಸುತ್ತಾರೆ. ಇಂತಹ ಸಂದರ್ಭದಲ್ಲಿ ಪೊಲೀಸರ ವರ್ತನೆ ಸಾರ್ವಜನಿಕರ ಮೇಲೆ ಹೆಚ್ಚಿನ ಪರಿಣಾಮ ಬೀರುತ್ತದೆ.

ಸಂಚಾರ ನಿಯಮದ ಅಪರಾಧಗಳು ಸಾಮಾನ್ಯವಾಗಿ ಯಾವುದೇ ಪೂರ್ವಯೋಜಿತ ಹಾಗೂ ಉದ್ದೇಶಗಳನ್ನು ಇಟ್ಟುಕೊಂಡು ಅಪರಾಧಗಳನ್ನು ಮಾಡುವುದಿಲ್ಲ. ಕಾರಣ ಅವರು ಪೊಲೀಸರಿಂದ ಉನ್ನತ ಮಟ್ಟದ ವರ್ತನೆಯನು ನಿರೀಕ್ಷಿಸುತ್ತಾರೆ. ಅಲ್ಲದೆ ನಿಯಂತ್ರಣ ಕರ್ತವ್ಯದ ಪ್ರತಿಯೊಂದು ಹಂತದಲ್ಲಿಯೂ ಸಾರ್ವಜನಿಕರು ತಮ್ಮ ಗಮನವನ್ನು ಹರಿಸುವುದನ್ನು ಕಾಣಬಹುದಾಗಿದೆ. ಆ ವೇಳೆಯಲ್ಲಿ ನಮ್ಮ ವರ್ತನೆಯನ್ನು ಅವರು ಕೂಲಂಕುಷವಾಗಿ ಅವಲೋಕಿಸುತ್ತಾರೆ. ತಪ್ಪು ವರ್ತನೆ ಕಂಡರೆ ಟೀಕೆಗಳಿಗೆ ಗುರಿಯಾಗಬೇಕಾಗುತ್ತದೆ. ಆ ಕಾರಣ ಸಂಚಾರ ನಿಯಮದ ಅಪರಾಧಗಳಲ್ಲಿ ಎಲ್ಲಾ ವಿಧವಾದ ಜನರು ಇರುವುದರಿಂದ ಆದಷ್ಟು ಅವರೊಡನೆ ಒಳ್ಳೆಯ ಭಾವನೆಗಳಿಂದ ಕೂಡಿದ ವರ್ತನೆಯಿಂದ ವರ್ತಿಸುವುದರಿಂದ ಪೊಲೀಸಿನವರ ಸೌಜನ್ಯಯುಕ್ತ ಮನೋಭಾವನೆ ಸಾರ್ವಜನಿಕರು ಹೊಗಳುವಂತೆ ಮತ್ತು ಇಲಾಖೆಯ ಗೌರವವನ್ನು ಹೆಚ್ಚಿಸುವಂತೆ ಮಾಡಬೇಕಾದುದು ಇತ್ತೀಚಿನ ದಿನಗಳಲ್ಲಿ ಅನಿವಾರ್ಯವಾಗಿದೆ.

ಪ್ರಾಮಾಣಿಕ ಶುದ್ಧ ಜೀವನವನ್ನು ಪ್ರತಿಯೊಬ್ಬರು ನಡೆಸತಕ್ಕದ್ದು. ಇಲಾಖೆಯ ಆದರ್ಶವನ್ನು ಕಾಪಾಡಲು ಪ್ರತಿಯೊಬ್ಬ ಪೊಲೀಸ್ ನೌಕರರಿಂದ ಉತ್ತಮ ನಡವಳಿಕೆಯನ್ನು ಪೊಲೀಸ್ ಇಲಾಖೆ ನಿರೀಕ್ಷಿಸುತ್ತದೆ. ಈ ಲಕ್ಷ್ಯವನ್ನು ಗಮನದಲ್ಲಿಟ್ಟುಕೊಂಡು ಇನ್ನು ಮುಂದೆ ಹಿರಿಯ ಪೊಲೀಸ್ ವರಿಷ್ಠಾಧಿಕಾರಿಗಳ ಟೀಕೆಗೆ ಆಸ್ಪದವಾಗದಂತೆ ದೈನಂದಿನ ಕೆಲಸ ಕಾರ್ಯಗಳಲ್ಲಿ ಈ ಕೆಳಕಂಡ ಅಂಶಗಳನ್ನು ಚಾಚೂ ತಪ್ಪದೆ ಪಾಲಿಸಲು ನಿರ್ದೇಶಿಸಲಾಗಿದೆ.

1. ಎಎಸ್‌ಐ, ಪಿಎಸ್‌ಐ ಮತ್ತು ಪಿಐ ರವರುಗಳು ಮಾತ್ರ ಸಂಚಾರ ನಿಯಮ ಉಲ್ಲಂಘನೆಗೆ ದಂಡವನ್ನು ವಿಧಿಸಿ ರಸೀದಿಯನ್ನು ನೀಡುವುದು. ಯಾವುದೇ ಪೊಲೀಸ್ ಪೇದೆಯಾಗಲಿ ಅಥವಾ ಮುಖ್ಯ ಪೇದೆಯಾಗಲಿ ಈ ಕಾರ್ಯವನ್ನು ಮಾಡಬಾರದು.

2. ಕೇವಲ ದಾಖಲಾತಿ ಪರಿಶೀಲನೆಗಾಗಿ ವಾಹನ ಚಾಲಕ/ಸವಾರನನ್ನು ನಿಲ್ಲಿಸಬಾರದು. ಚಾಲಕ/ಸವಾರನು ಸಂಚಾರ ನಿಯಮ ಉಲ್ಲಂಘಿಸಿದಾಗ ಮಾತ್ರ ದಾಖಲಾತಿ ಪರಿಶೀಲನೆ ಮತ್ತು ದಂಡ ವಿಧಿಸಲು ವಾಹನವನ್ನು ನಿಲ್ಲಿಸಬೇಕು.

3. ಪೊಲೀಸ್ ಠಾಣೆ ಮತ್ತು ಮಫ್ತಿ ವೇಷಗಳು ಎಫ್.ಟಿ.ವಿ.ಆರ್ ಮೂಲಕ ಮಾತ್ರ ಸಂಚಾರ ನಿಯಮ ಉಲ್ಲಂಘನೆಯನ್ನು ದಾಖಲಿಸಬೇಕು.

4. ಮದ್ಯಪಾನ ಮಾಡಿ ಚಾಲನೆ ಮಾಡಿದಾಗ ಸ್ಥಳದಂಡನೆ ಇರುವುದಿಲ್ಲ. ಮದ್ಯಪಾನ ಮಾಡಿ ಚಲಾಯಿಸುವ ಪ್ರತಿಯೊಂದು ಕೇಸಿನಲ್ಲಿ ನ್ಯಾಯಾಲಯದ ಮುಂದೆ ಹಾಜರಾಗಲು ನೋಟೀಸನ್ನು ನೀಡಬೇಕು. ಯಾವುದೇ ಕಾರಣಕ್ಕೂ ಈ ಸಂಬಂಧ ನ್ಯಾಯಾಲಯದಲ್ಲಿ ಕೇಸು ಮುಗಿಸುವುದಾಗಿ ಕಾನೂನು ಬಾಹಿರವಾಗಿ ಹಣವನ್ನು ಉಲ್ಲಂಘನೆದಾರರಿಂದ ಸ್ವೀಕರಿಸಬಾರದು.

5. ವಾಹನ ಚಾಲಕರಿಂದ ಚಾಲನಾ ಪರವಾನಗಿ ಪತ್ರವನ್ನು ಜಪ್ತಿ ಮಾಡಿಕೊಂಡಾಗ ಸ್ವೀಕೃತಿ ಪತ್ರವನ್ನು ಕಡ್ಡಾಯವಾಗಿ ನೀಡಬೇಕು.

6. ಸಾರ್ವಜನಿಕರು ವಿವಿಧ ಸಂಚಾರ ಉಲ್ಲಂಘನೆಗಳಿಗೆ ನಿಗಧಿಪಡಿಸಿರುವ ದಂಡದ ಮೊತ್ತದ ಬಗ್ಗೆ ಕೇಳಿದಾಗ ಉತ್ತರಿಸಲು ಅನುಕೂಲವಾಗುವಂತೆ ಎಎಸ್ಐ ಮೇಲ್ಪಟ್ಟ ಅಧಿಕಾರಿಗಳು ಸಂಚಾರ ನಿಯಮ ಉಲ್ಲಂಘನೆಗಳಿಗೆ ನಿಗಧಿಯಾಗಿರುವ ದಂಡದ ವಿವರಗಳ ಪಟ್ಟಿಯನ್ನು ಕಡ್ಡಾಯವಾಗಿ ಇಟ್ಟುಕೊಳ್ಳುವುದು.

7. ಸಂಚಾರ ಪೊಲೀಸರು ತಮ್ಮ ದೈನಂದಿನ ಕೆಲಸ ಕಾರ್ಯಗಳನ್ನು ನಿರ್ವಹಿಸುವಾಗ ಅದರಲ್ಲೂ ನಿಯಮ ಜಾರಿ ಸಮಯದಲ್ಲಿ ಯುವಕರೊಡನೆ, ಕಾರ್ಮಿಕರೊಡನೆ, ಹೆಂಗಸರು ಮತ್ತು ಮಕ್ಕಳೊಡನೆ, ಅಶಕ್ತರು ಮತ್ತು ದುರ್ಬಲರು ಮತ್ತು ನಿರ್ಗತಿಕರೊಡನೆ ಆದಷ್ಟು ಒಳ್ಳೆಯ ಭಾವನೆಗಳಿಂದ ಕೂಡಿದ ವರ್ತನೆಯಿಂದ ವರ್ತಿಸುವುದು.

8. ಯಾವುದೇ ಪೊಲೀಸ್ ಸಿಬ್ಬಂದಿ ಹಾಗೂ ಅಧಿಕಾರಿಗಳು ಸಾರ್ವಜನಿಕರನ್ನು ಅನಾವಶ್ಯಕವಾಗಿ ವಸ್ತುಗಳಿಗಾಗಿ ಮತ್ತು ಅಕ್ರಮ ಸಂಭಾವನೆಗೆ ಒತ್ತಾಯಿಸುವುದು, ಸ್ವೀಕರಿಸುವುದನ್ನು ಮಾಡಬಾರದು. ಈ ರೀತಿಯ ಅಕ್ರಮ ಚಟುವಟಿಕೆಗಳಲ್ಲಿ ಭಾಗಿಯಾಗಿರುವ ಬಗ್ಗೆ ತಿಳಿದುಬಂದಲ್ಲಿ ಅಂತಹವರ ವಿರುದ್ಧ ನಿರ್ದಾಕ್ಷಿಣ್ಯವಾಗಿ ಇಲಾಖಾ ಶಿಸ್ತು ಕ್ರಮ ಜರುಗಿಸಲಾಗುವುದು ಮತ್ತು ಮುಂದೆಂದೂ ಅವರು ಸಂಚಾರ ವಿಭಾಗದಲ್ಲಿ ಸೇವೆ ಸಲ್ಲಿಸುವ ಅವಕಾಶವನ್ನು ಕಳೆದುಕೊಳ್ಳುವರು.

29/12/12

ಡಾ: ಎಂ.ಎ. ಸಲೀಂ
ಅಪರ ಪೊಲೀಸ್ ಆಯುಕ್ತರು,
ಸಂಚಾರ, ಬೆಂಗಳೂರು ನಗರ.

ಎಲ್ಲಾ ಪೊಲೀಸ್ ಇನ್ಸ್‌ಪೆಕ್ಟರ್‌ರವರುಗಳಿಗೆ

ಪ್ರತಿಗಳನ್ನು: ಸಂಚಾರ ಉಪ ವಿಭಾಗಗಳ ಎಲ್ಲಾ ಸಹಾಯಕ ಪೊಲೀಸ್ ಆಯುಕ್ತರುಗಳಿಗೆ.
ಪ್ರತಿಗಳನ್ನು: ಉಪ ಪೊಲೀಸ್‌ಆಯುಕ್ತರು, ಸಂಚಾರ ಪೂರ್ವ ಮತ್ತು ಪಶ್ಚಿಮ. ಬೆಂಗಳೂರು.
ಪ್ರತಿಯನ್ನು ಅಭಿನಂದನೆಗಳೊಂದಿಗೆ: ಪೊಲೀಸ್‌ಆಯುಕ್ತರು, ಬೆಂಗಳೂರು ನಗರರವರ ಮಾಹಿತಿಗಾಗಿ ಸಲ್ಲಿಸಿದೆ.